# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)
ಹತ್ತನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 22ನೇ ಸೆಪ್ಟೆಂಬರ್, 2021
(ಸಮಯ: ಬೆಳಿಗ್ಗೆ 11.00 ಗಂಟೆಗೆ)

----

## 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಎಂಟನೇ ಪಟ್ಟಿ

ಆ) **ವರ್ಗಾವಣೆಗೊಂಡ ಪ್ರಶ್ನೆ:-**

| | | |
|---|---|---|
| 1. ದಿನಾಂಕ: 13.09.2021ರ 1ನೇ ಪಟ್ಟಿಯಿಂದ ವರ್ಗಾವಣೆಗೊಂಡ ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 3(136) | : | ಮಾನ್ಯ ಕೃಷಿ ಸಚಿವರು |
| 2. ದಿನಾಂಕ: 21.09.2021ರ 7ನೇ ಪಟ್ಟಿಯಿಂದ ವರ್ಗಾವಣೆಗೊಂಡ ಶ್ರೀ ರವಿ ಸಿ.ಟಿ. ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 101(1815) | | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು |

ಇ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಎಂಟನೇ ಪಟ್ಟಿ

## 2. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

**ಶ್ರೀ ಬಸವರಾಜ ಬೊಮ್ಮಾಯಿ (ಮುಖ್ಯಮಂತ್ರಿಗಳು) ಅವರು:-**

ಭಾರತ ಸಂವಿಧಾನದ 151(2)ನೇ ಅನುಚ್ಛೇದದ ಮೇರೆಗೆ, ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು ನೀಡಿರುವ ಅನುಪಾಲನಾ ಲೆಕ್ಕಪರಿಶೋಧನಾ ವರದಿಯನ್ನು (2021ನೇ ವರ್ಷದ ವರದಿ ಸಂಖ್ಯೆ:3) ಸಭೆಯ ಮುಂದಿಡುವುದು.

## 3. ಅರ್ಜಿಯನ್ನೊಪ್ಪಿಸುವುದು

**ಶ್ರೀ ಎನ್.ಹೆಚ್. ಶಿವಶಂಕರ ರೆಡ್ಡಿ** (ಮಾನ್ಯ ಸದಸ್ಯರು, ಅರ್ಜಿಗಳ ಸಮಿತಿ) ಅವರು ಈ ಕೆಳಕಂಡ ಅರ್ಜಿಯನ್ನು ಒಪ್ಪಿಸುವುದು:

ಗೌರಿಬಿದನೂರು ತಾಲ್ಲೂಕಿಗೆ ಹೆಬ್ಬಾಳ, ನಾಗಾವರ ಸಂಸ್ಕರಿಸಿದ ನೀರು ಸರಿಯಾಗಿ ಪೂರೈಕೆ ಆಗದಿರುವ ಬಗ್ಗೆ.

## 4. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯಗಳ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1) **ಶ್ರೀಯುತರುಗಳಾದ ಸಿದ್ದರಾಮಯ್ಯ, ಕೆ.ಆರ್. ರಮೇಶ್ ಕುಮಾರ್, ಕೃಷ್ಣ ಬೈರೇಗೌಡ, ಡಿ.ಕೆ. ಶಿವಕುಮಾರ್, ಹೆಚ್.ಕೆ. ಪಾಟೀಲ್ ಹಾಗೂ ಶ್ರೀಮತಿ ಸೌಮ್ಯ ರೆಡ್ಡಿ** – ಮೈಸೂರಿನ ಚಾಮುಂಡಿಪುರದ ರಿಂಗ್ ರಸ್ತೆ ಪ್ರದೇಶದಲ್ಲಿ ಸಾಮೂಹಿಕ ಅತ್ಯಾಚಾರಕ್ಕೆ ಒಳಗಾದ ಸಂತ್ರಸ್ಥೆಯನ್ನು ಸರ್ಕಾರಿ ಆಸ್ಪತ್ರೆಗೆ ದಾಖಲಿಸದೆ, ಸಾಂತ್ವನ ಕೇಂದ್ರಕ್ಕೆ ಕರೆದೊಯ್ಯದೆ ಆಕೆಯ ಹೇಳಿಕೆಯನ್ನು ದಾಖಲಿಸಿಕೊಳ್ಳದಿರುವ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

2) **ಶ್ರೀಯುತರುಗಳಾದ ಸಿದ್ದರಾಮಯ್ಯ, ಡಾ. ಅಜಯ್ ಧರ್ಮಸಿಂಗ್, ಪ್ರಿಯಾಂಕ ಖರ್ಗೆ, ಬಸನಗೌಡ ದದ್ದಲ್, ಜೆ.ಎನ್. ಗಣೇಶ್ ಹಾಗೂ ಇತರರು** – ಕಲ್ಯಾಣ ಕರ್ನಾಟಕದ ಶೈಕ್ಷಣಿಕ, ಸಾಮಾಜಿಕ, ಆರೋಗ್ಯ, ಆರ್ಥಿಕ ಹಾಗೂ ಇನ್ನಿತರೆ ಅಭಿವೃದ್ಧಿ ವಿಚಾರಗಳ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

3) **ಶ್ರೀಯುತರುಗಳಾದ ಹೆಚ್.ಕೆ. ಕುಮಾರಸ್ವಾಮಿ, ಹೆಚ್.ಡಿ. ಕುಮಾರ ಸ್ವಾಮಿ, ಹೆಚ್.ಡಿ. ರೇವಣ್ಣ, ಸಿ.ಎಸ್. ಪುಟ್ಟರಾಜು, ಕೆ.ಎಸ್. ಲಿಂಗೇಶ್ ಹಾಗೂ ಇತರರು** – ರಾಜ್ಯದಲ್ಲಿ ಮುಂಗಾರಿನಲ್ಲಿ ಬಿದ್ದ ಮಳೆಯಿಂದಾಗಿ ರೈತರು ಬೆಳೆದ ಬೆಳೆಗಳಿಗೆ ಹಾಗೂ ಸಾರ್ವಜನಿಕ ಆಸ್ತಿ ಪಾಸ್ತಿಗಳಿಗೆ ಹಾನಿಯುಂಟಾಗಿರುವುದರಿಂದ ಪರಿಹಾರವನ್ನು ವಿತರಿಸುವ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

4) **ಶ್ರೀಯುತರುಗಳಾದ ಸಿದ್ದರಾಮಯ್ಯ, ಕೆ.ಆರ್. ರಮೇಶ್ ಕುಮಾರ್, ಕೃಷ್ಣ ಬೈರೇಗೌಡ, ಡಿ.ಕೆ. ಶಿವಕುಮಾರ್, ಹೆಚ್.ಕೆ. ಪಾಟೀಲ್ ಹಾಗೂ ಡಾ. ಅಜಯ್ ಧರ್ಮಸಿಂಗ್** – ರಾಜ್ಯದಲ್ಲಿ ಇತ್ತೀಚೆಗೆ ಸಂಬಂಧಿಸಿದ ಕೋವಿಡ್–19ರ ಎರಡನೇ ಅಲೆಯಿಂದ ಅಪಾರ ಪ್ರಮಾಣದ ಸಾವು ನೋವುಗಳು ಸಂಭವಿಸಿದ್ದು, ಈ ಸಾಂಕ್ರಾಮಿಕ ಕಾಯಿಲೆಯಿಂದ ಮರಣ ಹೊಂದಿದ ಕುಟುಂಬ ಸದಸ್ಯರಿಗೆ ಪರಿಹಾರ ನೀಡುವ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

.. 3/ ..

5) **ಶ್ರೀಯುತರುಗಳಾದ ಕೆ.ಎಂ. ಶಿವಲಿಂಗೇಗೌಡ, ಎಸ್.ಆರ್. ಶ್ರೀನಿವಾಸು (ವಾಸು), ಡಾ. ಹೆಚ್.ಡಿ. ರಂಗನಾಥ್, ಕೆ.ಎಸ್. ಲಿಂಗೇಶ್, ಗೂಳಿಹಟ್ಟಿ ಡಿ. ಶೇಖರ್ ಹಾಗೂ ಇತರರು** – ರಾಜ್ಯದಲ್ಲಿ ಕಾಡುಗೊಲ್ಲ ಉಪ ಪಂಗಡಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸುವ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

## 5. ಶಾಸನ ರಚನೆ

### ವಿಧೇಯಕವನ್ನು ಪರ್ಯಾಲೋಚಿಸುವುದು ಮತ್ತು ಅಂಗೀಕರಿಸುವುದು

**1. ಶ್ರೀ ಎನ್. ನಾಗರಾಜು ಎಂ.ಟಿ.ಬಿ. (ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು) ಅವರು:–**

ಅ) 2021ನೇ ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**2. ಶ್ರೀ ಎನ್. ನಾಗರಾಜು ಎಂ.ಟಿ.ಬಿ. (ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು) ಅವರು:–**

ಅ) 2021ನೇ ಸಾಲಿನ ಕರ್ನಾಟಕ ಪೌರಸಭೆಗಳು ಮತ್ತು ಕೆಲವು ಇತರ ಕಾನೂನು (ಎರಡನೇ ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**3. ಶ್ರೀ ಬಿ.ಸಿ. ನಾಗೇಶ್ (ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು) ಅವರು:–**

ಅ) 2021ನೇ ಸಾಲಿನ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ ವರ್ಗಾವಣೆ ನಿಯಂತ್ರಣ) (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 6. ಗಮನ ಸೆಳೆಯುವ ಸೂಚನೆಗಳು

1) **ಶ್ರೀ ರಿಜ್ವಾನ್ ಅರ್ಷದ್ ಅವರು** – ಶಿವಾನಂದ ವೃತ್ತದಲ್ಲಿ ನಿರ್ಮಾಣ ಹಂತದಲ್ಲಿರುವ ಗ್ರೇಡ್ ಸಪರೇಟರ್ ಕಾಮಗಾರಿಯ ವಿಳಂಬದಿಂದ ಜನಸಾಮಾನ್ಯರಿಗೆ ಉಂಟಾಗುತ್ತಿರುವ ತೊಂದರೆಯ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

2) **ಡಾ. ಯತೀಂದ್ರ ಸಿದ್ದರಾಮಯ್ಯ ಅವರು** – ಡಾ. ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ಆದಿ ಜಾಂಬವ ಅಭಿವೃದ್ಧಿ ನಿಗಮಗಳಿಂದ ವಿವಿಧ ಸೌಲಭ್ಯವನ್ನು ನೀಡಲು ನಿಗದಿಪಡಿಸಿರುವ ಗುರಿಯಲ್ಲಿನ ವ್ಯತ್ಯಾಸವನ್ನು ಸರಿಪಡಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

3) **ಶ್ರೀ ದಿನಕರ ಕೇಶವ ಶೆಟ್ಟಿ ಅವರು –** ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಉತ್ತರ ಕನ್ನಡ ಜಿಲ್ಲೆಗೆ ವಿಶ್ವವಿದ್ಯಾಲಯವನ್ನು ಮಂಜೂರು ಮಾಡುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಸಚಿವರ ಗಮನ ಸೆಳೆಯುವುದು.

4) **ಶ್ರೀ ಎನ್.ಎ. ಹ್ಯಾರಿಸ್ ಅವರು** – ಬೆಂಗಳೂರು ನಗರ ವ್ಯಾಪ್ತಿಯ ಸಾರ್ವಜನಿಕ ಸ್ಥಳಗಳಲ್ಲಿ ವಾರಸುದಾರರಿಲ್ಲದ ವಾಹನಗಳ ನಿಲುಗಡೆಯಿಂದ ಉಂಟಾಗುತ್ತಿರುವ ಸಮಸ್ಯೆಗಳ ಬಗ್ಗೆ ಹಾಗೂ ಇಂತಹ ವಾಹನಗಳ ನಿರ್ವಹಣೆಗೆ ಸೂಕ್ತ ಕಾನೂನು ರೂಪಿಸುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

5) **ಶ್ರೀ ಎಲ್.ಎ. ರವಿಸುಬ್ರಮಣ್ಯ ಅವರು** – ಶ್ರೀ ಗುರು ರಾಘವೇಂದ್ರ ಸಹಕಾರಿ ಬ್ಯಾಂಕ್‌ನಲ್ಲಿ ನಡೆದಿರುವ ಅವ್ಯವಹಾರದಿಂದ ತೊಂದರೆಗೊಳಗಾಗಿರುವ ಠೇವಣಿದಾರರಿಗೆ ಠೇವಣಿ ಮೊತ್ತವನ್ನು ಬಡ್ಡಿ ಸಮೇತ ಕಾಲಬದ್ಧ ಸಮಯದಲ್ಲಿ ಹಿಂದಿರುಗಿಸಲು ಹಾಗೂ ಈ ಸಂಬಂಧದ ಆಡಿಟ್ ರಿಪೋರ್ಟ್‌ನ್ನು ಬಿಡುಗಡೆಗೊಳಿಸಲು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಸಹಕಾರ ಸಚಿವರ ಗಮನ ಸೆಳೆಯುವುದು.

6) **ಶ್ರೀ ಜಿ.ಟಿ. ದೇವೇಗೌಡ ಅವರು** – ಮೈಸೂರು ತಾಲ್ಲೂಕಿನಲ್ಲಿ ಬಗರ್ ಹುಕುಂ ಸಮಿತಿ ರಚಿಸದೇ ಇರುವುದರಿಂದ ರೈತರಿಗೆ ಸಾಗುವಳಿ ಚೀಟಿ ನೀಡಲು ಸಾಧ್ಯವಾಗದೇ ಇರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

7) **ಶ್ರೀ ಹೆಚ್.ಕೆ. ಕುಮಾರಸ್ವಾಮಿ, ಶ್ರೀ ಎ.ಟಿ. ರಾಮಸ್ವಾಮಿ ಮತ್ತು ಶ್ರೀ ಕೆ.ಎಸ್. ಲಿಂಗೇಶ್ ಅವರುಗಳು** – ಮಲೆನಾಡು ಭಾಗಗಳಲ್ಲಿ ತೀವ್ರಗೊಂಡಿರುವ ಕಾಡಾನೆಗಳ ನಿಯಂತ್ರಣಕ್ಕಾಗಿ ಕೈಗೊಂಡಿರುವ ಕ್ರಮಗಳ ಬಗ್ಗೆ ಮಾನ್ಯ ಅರಣ್ಯ ಹಾಗೂ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರ ಗಮನ ಸೆಳೆಯುವುದು.

8) **ಶ್ರೀ ಭೀಮಾನಾಯ್ಕ ಎಸ್. ಅವರು** – ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ಕೊಟ್ಟೂರು ಸೇರಿದಂತೆ 17 ಕೆರೆಗಳಿಗೆ ನೀರು ತುಂಬಿಸುವ ನೀರಾವರಿ ಯೋಜನೆಯ ಅನುಷ್ಠಾನವು ವಿಳಂಬವಾಗುತ್ತಿರುವ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

9) **ಶ್ರೀ ಎ.ಎಸ್. ಜಯರಾಂ (ಮಸಾಲಾ ಜಯರಾಂ) ಅವರು** – ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕು ಕಛೇರಿಯ ಕಟ್ಟಡವು ಶಿಥಿಲಗೊಂಡು ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿರುವುದರಿಂದ ಮಿನಿ ವಿಧಾನಸೌಧ ನಿರ್ಮಾಣದ ಕಾಮಗಾರಿಯನ್ನು ಕೈಗೆತ್ತಿಕೊಳ್ಳುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

.. 5/ ..

10) **ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ ಅವರು** – ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಯಮಕನಮರಡಿಯ ಹತ್ತರಗಿ ಗ್ರಾಮದಲ್ಲಿ ಐಟಿಐ ಕಾಲೇಜಿನ ಕಾಮಗಾರಿಯ ಪ್ರಗತಿಯ ಬಗ್ಗೆ ಮಾನ್ಯ ಕಾರ್ಮಿಕ ಸಚಿವರ ಗಮನ ಸೆಳೆಯುವುದು.

11) **ಶ್ರೀ ಅಭಯ ಪಾಟೀಲ ಅವರು** – ಬೆಳಗಾವಿ ನಗರದಲ್ಲಿ ನಗರಾಭಿವೃದ್ಧಿ ಪ್ರಾಧಿಕಾರದಿಂದ ಏಕ ವಸತಿ ನಿವೇಶನಕ್ಕೆ ಅನುಮೋದನೆಯನ್ನು ಪಡೆದುಕೊಂಡು ನಗರ/ಗ್ರಾಮೀಣ ಭೂಮಾಪನ ಇಲಾಖೆಯಿಂದ ಕಾನೂನು ಬಾಹಿರವಾಗಿ ಮಾರಾಟ ಮಾಡಿರುವ ಬಗ್ಗೆ ತನಿಖೆ ನಡೆಸಲು ಹಾಗೂ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ನಗರಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

12) **ಶ್ರೀ ರಾಮಲಿಂಗಾರೆಡ್ಡಿ ಅವರು** – ಪೊಲೀಸ್ ಸಿಬ್ಬಂದಿಗಳು ಸಂಚಾರ ಉಲ್ಲಂಘನೆ ಮಾಡಿದ ವಾಹನಗಳನ್ನು ತಡೆಗಟ್ಟುವ ಸಂದರ್ಭದಲ್ಲಿ ಅಪಘಾತವಾಗುತ್ತಿರುವ ಬಗ್ಗೆ ಹಾಗೂ ಬೆಂಗಳೂರು ನಗರದಲ್ಲಿ ಸಾರ್ವಜನಿಕರ ವಾಹನಗಳ ಟೋಯಿಂಗ್ ವಾಹನ ಹಾಗೂ ಸ್ಪಾಟ್ ಫೈನ್ ನೀತಿಯಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

13) **ಶ್ರೀ ದೇವಾನಂದ್ ಫುಲಸಿಂಗ್ ಚವ್ಹಾಣ್ ಅವರು** – ವಿಜಯಪುರ ಜಿಲ್ಲೆಯಲ್ಲಿ ನೂತನವಾಗಿ ಘೋಷಣೆ ಮಾಡಿರುವ ಚಡಚಣ ತಾಲ್ಲೂಕಿನಲ್ಲಿ ಸಬ್‌ರಿಜಿಸ್ಟ್ರಾರ್ ಕಛೇರಿಯನ್ನು ಪ್ರಾರಂಭಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

14) **ಶ್ರೀ ಶರತ್ ಕುಮಾರ್ ಬಚ್ಚೇಗೌಡ ಅವರು** – ಹೊಸಕೋಟೆ ಪಟ್ಟಣದ ಒಳಚರಂಡಿ ಕಾಮಗಾರಿಯ ವಿಳಂಬದಿಂದ ಸಾರ್ವಜನಿಕರು ಅನುಭವಿಸುತ್ತಿರುವ ತೊಂದರೆಯ ಬಗ್ಗೆ ಮಾನ್ಯ ನಗರಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

15) **ಶ್ರೀ ಸಿದ್ದು ಸವದಿ ಅವರು** – ರಾಜ್ಯದಲ್ಲಿನ ನೇಕಾರರಿಗೆ 1% ರಿಂದ 3% ರಂತೆ ನೀಡಲಾಗಿರುವ ಕ್ಯಾಶ್ ಕ್ರೆಡಿಟ್ ಸಾಲವನ್ನು ಮನ್ನಾ ಮಾಡುವ ಬಗ್ಗೆ ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಸಕ್ಕರೆ ಸಚಿವರ ಗಮನ ಸೆಳೆಯುವುದು.

16) **ಶ್ರೀ ಎಂ. ಚಂದ್ರಪ್ಪ ಅವರು** – ಹೊಳಲ್ಕೆರೆ ತಾಲ್ಲೂಕಿನ ಮಲ್ಲಾಡಿಹಳ್ಳಿ ಗ್ರಾಮದಲ್ಲಿ ಕಾಮಗಾರಿ ಪೂರ್ಣಗೊಂಡಿರುವ 66 ಕೆ.ವಿ. ಉಪ ಕೇಂದ್ರಕ್ಕೆ ವಿದ್ಯುತ್ ಸಂಪರ್ಕವನ್ನು ಕಲ್ಪಿಸುವ ಬಗ್ಗೆ ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

17) **ಶ್ರೀ ಎ. ಮಂಜುನಾಥ್ ಮತ್ತು ಡಾ. ಕೆ. ಶ್ರೀನಿವಾಸಮೂರ್ತಿ ಅವರುಗಳು** – ನವ ಬೆಂಗಳೂರು ಯೋಜನೆಯಡಿಯಲ್ಲಿ ಘನತ್ಯಾಜ್ಯ ವಿಲೇವಾರಿಯಿಂದಾಗಿ ಬಾಧಿತಗೊಂಡಿರುವ ಪ್ರದೇಶಗಳಿಗೆ ಮೂಲಭೂತ ಸೌಲಭ್ಯವನ್ನು ಒದಗಿಸಲು ತಡೆಹಿಡಿದಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

18) **ಶ್ರೀ ಆನಂದ ಸಿದ್ದು ನ್ಯಾಮಗೌಡ ಅವರು** – ಜಮಖಂಡಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಸಾವಳಗಿ ಹೋಬಳಿಯಲ್ಲಿನ 110 ಕೆ.ವಿ. ಸ್ಟೇಷನ್‌ಗೆ 40 ಮೆಘಾವ್ಯಾಟ್‌ಗಿಂತಲೂ ಅಧಿಕ ವಿದ್ಯುತ್‌ನ್ನು ಸರಬರಾಜು ಮಾಡಲು ಹಾಗೂ ಚಿಕ್ಕಲಕಿ ಗ್ರಾಮದಲ್ಲಿ ಹೊಸದಾಗಿ 220 ಕೆ.ವಿ. ಸ್ಟೇಷನ್ ಪ್ರಾರಂಭಿಸುವ ಬಗ್ಗೆ ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

19) **ಶ್ರೀ ಸಂಜೀವ್ ಮಠಂದೂರು ಅವರು** – ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 94ಸಿ ಮತ್ತು 94ಸಿಸಿ ಅಡಿಯಲ್ಲಿ ಅನಧಿಕೃತ ವಾಸದ ಮನೆಗಳನ್ನು ಸಕ್ರಮಗೊಳಿಸಲಾದ ಫಲಾನುಭವಿಗಳಿಗೆ 30*40ರ ಮನೆಗಳನ್ನು ಮಂಜೂರು ಮಾಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

20) **ಶ್ರೀ ಹೆಚ್. ಹಾಲಪ್ಪ ಹರತಾಳು ಅವರು** – ರಾಜ್ಯದಲ್ಲಿ ಪದವಿ ಪೂರ್ವ ಕಾಲೇಜಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರು ಹಾಗೂ ಅರೆಕಾಲಿಕ ಉಪನ್ಯಾಸಕರುಗಳಿಗೆ ಪೂರ್ಣ ಪ್ರಮಾಣದ ಗೌರವಧನ ನೀಡುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರ ಗಮನ ಸೆಳೆಯುವುದು.

21) **ಶ್ರೀ ಲಾಲಾಜಿ ಆರ್. ಮೆಂಡನ್ ಅವರು** – ಉಡುಪಿ ಜಿಲ್ಲೆಯ ಕಾಪು ತಾಲ್ಲೂಕಿನ ಪಡುಬಿದ್ರಿ ಗ್ರಾಮ ಪಂಚಾಯತ್‌ಗೆ ಎಸ್.ಎಲ್.ಆರ್.ಎಮ್. ಕಸ ವಿಲೇವಾರಿ ಘಟಕ ಪ್ರಾರಂಭಿಸಲು ಜಾಗವನ್ನು ಒದಗಿಸುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

22) **ಶ್ರೀ ಕೆ. ರಘುಪತಿ ಭಟ್ ಅವರು** – ಉಡುಪಿಯ ಕೂಸಮ್ಮ ಶಂಭುಶೆಟ್ಟಿ ಸ್ಮಾರಕ ಹಾಜಿ ಅಬ್ದುಲ್ಲ ತಾಯಿ ಮತ್ತು ಮಕ್ಕಳ ಆಸ್ಪತ್ರೆಯ ನಿರ್ವಹಣೆಯನ್ನು ಕಾನೂನುಬಾಹಿರವಾಗಿ ಖಾಸಗಿಯವರಿಗೆ ನೀಡಿರುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

23) **ಶ್ರೀ ಡಿ. ವೇದವ್ಯಾಸ ಕಾಮತ್ ಅವರು** – ಮಂಗಳೂರು ನಗರದಲ್ಲಿ ಕಾರ್ಯನಿರ್ವಹಿಸುತ್ತಿರುವ ಬ್ಯಾಟರಿ ಚಾಲಿತ ಆಟೋ ರಿಕ್ಷಾವನ್ನು ಆರ್.ಟಿ.ಎಂ. ವ್ಯಾಪ್ತಿಯಲ್ಲಿ ನೋಂದಣಿಗೆ ತಂದು ಸಾರ್ವಜನಿಕರಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ಸಾರಿಗೆ ಮತ್ತು ಪರಿಶಿಷ್ಟ ಕಲ್ಯಾಣ ಸಚಿವರ ಗಮನ ಸೆಳೆಯುವುದು.

24) **ಶ್ರೀ ಎಂ. ಕೃಷ್ಣಾರೆಡ್ಡಿ ಅವರು** – ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಪ್ರಸ್ತಾಪಿಸಲಾಗಿರುವ ಹೊರವರ್ತುಲ ಯೋಜನೆಯಲ್ಲಿ ಅವೈಜ್ಞಾನಿಕವಾದ ರಸ್ತೆಗಳ ನಿರ್ಮಾಣವನ್ನು ಪ್ರಸ್ತಾಪಿಸಿರುವುದರಿಂದ ರೈತರು, ನಿವೇಶನದಾರರು ಹಾಗೂ ಸ್ಥಳೀಯ ನಿವಾಸಿಗಳಿಗೆ ಅನಾನುಕೂಲವಾಗುತ್ತಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

## 7. ಅರ್ಧ ಗಂಟೆ ಕಾಲಾವಧಿ ಚರ್ಚೆ

1) **ಶ್ರೀ ಕೆ. ಅನ್ನದಾನಿ ಅವರು** – ಮಂಡ್ಯ ಸಕ್ಕರೆ ಕಾರ್ಖಾನೆಯನ್ನು ಖಾಸಗೀಕರಣಗೊಳಿಸುವುದನ್ನು ಸ್ಥಗಿತಗೊಳಿಸಿ ಸರ್ಕಾರಿ ಸ್ವಾಮ್ಯದ ಒಡೆತನದಲ್ಲಿಯೇ ಮುಂದುವರೆಸುವ ಬಗ್ಗೆ ದಿನಾಂಕ:14.09.2021ರ ಶೂನ್ಯವೇಳೆಯಲ್ಲಿ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ

ಹಾಗೂ

**ಶ್ರೀ ಜೆ.ಎನ್. ಗಣೇಶ್ ಅವರು** – ಕಂಪ್ಲಿ ನಗರದಲ್ಲಿರುವ ಸಕ್ಕರೆ ಕಾರ್ಖಾನೆಯ ಕಾರ್ಯಾಚರಣೆ ಸ್ಥಗಿತಗೊಂಡಿರುವ ಬಗ್ಗೆ ದಿನಾಂಕ:17.09.2021ರಂದು ಐದನೇ ಪಟ್ಟಿಯಲ್ಲಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 65(871)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

2) **ಶ್ರೀ ಎ.ಟಿ. ರಾಮಸ್ವಾಮಿ ಅವರು** – ಭಾರಿ ಪ್ರಮಾಣದ ಸರ್ಕಾರಿ ಜಮೀನುಗಳು ಸುಳ್ಳು ದಾಖಲೆಗಳ ಮೂಲಕ ಭೂಗಳ್ಳರ ಪಾಲಾಗುತ್ತಿರುವ ಬಗ್ಗೆ ದಿನಾಂಕ: 15.09.2021ರ ಗಮನ ಸೆಳೆಯುವ ಸೂಚನೆಗೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

3) **ಶ್ರೀ ಜೆ.ಎನ್. ಗಣೇಶ್ ಅವರು** – ಪರಿಶಿಷ್ಟ ಪಂಗಡಕ್ಕೆ ಮೀಸಲಾತಿಯನ್ನು ಘೋಷಣೆ ಮಾಡುವುದಕ್ಕೆ ಸಂಬಂಧಿಸಿದಂತೆ ನಿವೃತ್ತ ನ್ಯಾಯಮೂರ್ತಿ ನೇತೃತ್ವದ ತ್ರಿಸದಸ್ಯ ಸಮಿತಿ ರಚನೆ ಮಾಡಿರುವ ಬಗ್ಗೆ ದಿನಾಂಕ: 15.09.2021ರ ಗಮನ ಸೆಳೆಯುವ ಸೂಚನೆಗೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

4) **ಶ್ರೀ ಶರತ್ ಕುಮಾರ್ ಬಚ್ಚೇಗೌಡ ಅವರು** – "ಪ್ರಧಾನ ಮಂತ್ರಿ ಅವಾಸ್ ಯೋಜನೆ"ಯ ಬಗ್ಗೆ ದಿನಾಂಕ: 20.09.2021ರ ಆರನೇ ಪಟ್ಟಿಯಲ್ಲಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 85(1507)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

5) **ಶ್ರೀ ಶಿವಾನಂದ ಎಸ್. ಪಾಟೀಲ್ ಅವರು** – "ಲಾಲ್ ಬಹದ್ದೂರ್ ಶಾಸ್ತ್ರಿ ಅಣೆಕಟ್ಟು ಎತ್ತರ" ಎಂಬ ವಿಷಯದ ಬಗ್ಗೆ ದಿನಾಂಕ:21.09.2021ರ ಏಳನೇ ಪಟ್ಟಿಯಲ್ಲಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 92(2003) ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ

ಹಾಗೂ

ಶ್ರೀಯುತರುಗಳಾದ ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್, ಅಮರೇಗೌಡ ಎಲ್. ಪಾಟೀಲ್ ಬಯ್ಯಾಪುರ, ಎ.ಎಸ್. ಪಾಟೀಲ್ (ನಡಹಳ್ಳಿ), ಮಹಾಂತೇಶ್ ಕೌಜಲಗಿ, ಸಿದ್ದು ಸವದಿ ಹಾಗೂ ಇತರರು ಇದೇ ವಿಷಯಕ್ಕೆ ಸಂಬಂಧಿಸಿದಂತೆ ನೀಡಿರುವ ಸೂಚನೆ ಮೇಲೆ ಅರ್ಧ ಗಂಟೆ ಕಾಲ ಚರ್ಚಿಸುವುದು.

**ಎಂ.ಕೆ. ವಿಶಾಲಾಕ್ಷಿ**
**ಕಾರ್ಯದರ್ಶಿ(ಪ್ರ)**

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
http://kla.kar.nic.in/assembly/lob/lob.htm